# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 5ನೇ ಸಂಚಿಕೆ ಕೊಪ್ಪ 20-9-1987 ಭಾನುವಾರ ಬೆಲೆ 50 ಪೈಸೆ


## ಧಾರ್ಮಿಕ ಸೌಹಾರ್ದದ ಅವಶ್ಯಕತೆ

ಕೊಪ್ಪ : ಇಸ್ಲಾಮಿಕ್ ವೆಲ್ಫೇರ್ ಅಸೋಸಿಯೇಶನ್ ಆಶ್ರಯದಲ್ಲಿ ವಿಶೇಷ 'ಸೌಹಾರ್ದ ಕೂಟ' ಈಚೆಗೆ ನಡೆಯಿತು. ಅಧ್ಯಕ್ಷತೆ ವಹಿಸಿದ್ದ ಮುಂಗಾರಿನ ಪತ್ರಕರ್ತರಾದ ಅಬ್ದುಸ್ಸಲಾಂ ಪುತ್ತಿಗೆಯವರು ಮಾತನಾಡಿ, ಧಾರ್ಮಿಕ ಭಿನ್ನತೆಗಳಿದ್ದಾಗ್ಯೂ ಸಹ ಎಲ್ಲರಿಗೂ ಸಮಾನವಾಗಿರುವಂತಹ ಮಾನವೀಯ ಮೌಲ್ಯಗಳ ಆಧಾರದಲ್ಲಿ ಎಲ್ಲಾ ಕೋಮುಗಳೂ ಪರಸ್ಪರ ನಿಕಟರಾಗಿ ತಮ್ಮಲ್ಲಿನ ಸಮಸ್ಯೆಗಳ ನಿವಾರಣೆಗೆ ಶ್ರಮಿಸಬೇಕು ಎಂದು ಎಲ್ಲಾ ಮತ ಬಾಂಧವರಿಗೆ ಕರೆ ಕೊಟ್ಟರು.

ಮುಖ್ಯ ಅತಿಥಿಗಳಾಗಿದ್ದ ಕನ್ನಡ ಉಪನ್ಯಾಸಕ ಜಿ. ಶ್ರೀನಿವಾಸ್‌ರವರು ಮಾತನಾಡಿ, ರಾಜಕಾರಣಿಗಳು ಹುಟ್ಟು ಹಾಕುವಂತಹ ಕುಟಿಲ ಕೋಮು ಭಾವನೆಗಳಿಗೆ ಜನ ಬಲಿ ಬೀಳಬಾರದೆಂದು ಎಚ್ಚರಿಸಿದರು.

ಇಲ್ಲಿನ ಚರ್ಚ್ ಪುರೋಹಿತರಾದ ಜೆ. ಪಿಂಟೋ ಅವರು, ಪ್ರಸ್ತುತ ಸಮಾಜದಲ್ಲಿ ಸೌಹಾರ್ದ ಕೂಟದ ಮಹತ್ವದ ಬಗ್ಗೆ ವಿಶ್ಲೇಷಿಸಿದರು. ಯೂಸುಫ್ ಮುಸ್ಲಿಯಾರ್‌ರವರು ಮಾತನಾಡಿ, ಪ್ರತಿಯೊಂದು ಧರ್ಮವೂ ಶಾಂತಿ, ಸೌಹಾರ್ದತೆಯನ್ನು ಕಲಿಸುತ್ತದೆ. ಅದನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಿದೆ ಎಂದರು.

ಜುಬೇರ್ ಸ್ವಾಗತಿಸಿ, ಉಮರಬ್ಬ ವಂದಿಸಿದರು. (ವರದಿ : ಜುಬೇರ್)

# ಶೃಂಗೇರಿಯಲ್ಲಿ ಅಕ್ಟೋಬರ್ 4 ರಂದು ಅಂತರ್ಜಾತಿ ವಿವಾಹಿತರ ಸಮಾವೇಶ

**ಶೃಂಗೇರಿ : ಜಿಲ್ಲಾ ವಿಚಾರವಾದಿ ವೇದಿಕೆ ಆಶ್ರಯದಲ್ಲಿ ಅಂತರ್ಜಾತಿ ವಿವಾಹಿತರ ಸಮಾವೇಶವೊಂದು ಇಲ್ಲಿ ಅಕ್ಟೋಬರ್ 4ರ ಭಾನುವಾರ ನಡೆಯಲಿದೆ.**

'ಮುಂಗಾರು' ದಿನ ಪತ್ರಿಕೆ ಸಂಪಾದಕರಾದ ವಡ್ಡರ್ಸೆ ರಘುರಾಮ ಶೆಟ್ಟರು ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಲಿದ್ದು, ಖ್ಯಾತ ಸಾಹಿತಿ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರು ಸಮಾವೇಶವನ್ನು ಉದ್ಘಾಟಿಸಿ ಅದರ ರೂಪುರೇಷೆಗಳ ಬಗ್ಗೆ ಪ್ರಾಸ್ತಾವಿಕ ಭಾಷಣ ಮಾಡುವರು.

'ಜಾತಿ ವ್ಯವಸ್ಥೆ ಮತ್ತು ಅಂತರ್ಜಾತಿ ವಿವಾಹ', ಎಂಬ ವಿಚಾರದಲ್ಲಿ ಮೈಸೂರಿನ ಕೆ. ರಾಮದಾಸ್, ಅಂತರ್ಜಾತಿ ವಿವಾಹ: ವೈಜ್ಞಾನಿಕ ವಿವೇಚನೆ' ಕುರಿತು ಡಾ|| ಬೆಸಗರಹಳ್ಳಿ ರಾಮಣ್ಣ, 'ಅಂತರ್ಜಾತಿ ವಿವಾಹ: ವ್ಯವಸ್ಥೆಯ ಹೊಣೆಗಾರಿಕೆ' ಕುರಿತು ಶ್ರೀಮತಿ ಸಾರಾ ಅಬೂಬಕ್ಕರ್ ಹಾಗೂ 'ಅಂತರ್ಜಾತಿ ವಿವಾಹ: ಹೊಸ ಆಯಾಮಗಳು' ಎಂಬ ವಿಚಾರವಾಗಿ 'ಪ್ರಜಾವಾಣಿ'ಯ ಸುಜೀತನ ಸ್ವರೂಪ್ ವಿಷಯಗಳನ್ನು ಮಂಡಿಸುವರು.

ಬೆಳಿಗ್ಗೆ 10 ಗಂಟೆಯಿಂದ ಸಂಜೆ 4 ಗಂಟೆಯವರೆಗಿನ ಇದಿಷ್ಟು ಕಾರ್ಯಕ್ರಮದ ಕೊನೆಯಲ್ಲಿ ಪಶ್ನೋತ್ತರ, ಚರ್ಚೆ. ವಿಚಾರ ವಿನಿಮಯ, ಅನುಭವ ನಿರೂಪಣೆಗಳಾದ ನಂತರ ಅಧ್ಯಕ್ಷರ ಭಾಷಣವಿದೆ. ಅನಂತರ ನಿರ್ಣಯಗಳ ಮಂಡನೆ ಮತ್ತು ಅಂಗೀಕಾರ ಆದೊಡನೆ ಸಮಾವೇಶ ಮುಕ್ತಾಯಗೊಳ್ಳುತ್ತದೆ.

### ಮಾನವೀಯ ಸಂಬಂಧಗಳಿಗಾಗಿ

ಜಾತೀಯತೆಯ ಕಟ್ಟುಗಳನ್ನು ಸಡಿಲಿಸಿ ಸಮಾಜದಲ್ಲಿ ಮಾನವೀಯ ಸಂಬಂಧಗಳನ್ನು ಹೆಚ್ಚಿಸಲು ಪರಿಣಾಮಕಾರಿಯಾದ ಮದ್ದಾಗಬಲ್ಲ ಅಂತರ್ಜಾತಿ ವಿವಾಹವು ಗಂಡು ಹೆಣ್ಣುಗಳು ತಮಗೆ ತಕ್ಕ ಸಂಗಾತಿಗಳನ್ನು ಪಡೆದುಕೊಳ್ಳುವಲ್ಲಿ ಸಹ ಅವಕಾಶಗಳ ದಿಡ್ಡಿ ಬಾಗಿಲನ್ನೇ ತೆರೆಯಬಲ್ಲುದೆಂಬುದು ಇಂದು ಎಲ್ಲರೂ ಒಪ್ಪುವ ಸಂಗತಿ. ಆದರೆ 21 ನೇ ಶತಮಾನದ ಹೊಸ್ತಿಲಲ್ಲಿ ನಿಂತಿರುವ ಈ ಕಾಲದಲ್ಲೂ ಕೂಡ ಸಮಾಜದೊಳಗಿನ ಮೂಢ ನಂಬಿಕೆ ಮತ್ತು ಪಟ್ಟಭದ್ರ ಹಿತಾಸಕ್ತಿಗಳಿಂದಾಗಿ ಅಂತರ್ಜಾತಿ ವಿವಾಹ ಇನ್ನೂ ಸಹ ಉಪೇಕ್ಷೆ, ತಿರಸ್ಕಾರಗಳಿಗೆ ಈಡಾಗಿರುವುದು ಮಾತ್ರವಲ್ಲ, ಅಡ್ಡಿ, ಆತಂಕ, ಬಹಿಷ್ಕಾರ, ಆಕ್ರಮಣಗಳಂತಹ ಪ್ರತಿರೋಧವನ್ನು ಕೂಡ ಎದುರಿಸಬೇಕಾಗಿದೆ ಎಂದು ವಿಚಾರವಾದಿ ವೇದಿಕೆ ಹೇಳಿದೆ.

ಈ ಬಗೆಗೆಲ್ಲ ಚರ್ಚಿಸಿ, ಜಾತೀಯತೆಯ ಮಬ್ಬಿನಲ್ಲಿರುವವರ ಕಣ್ಣು ತೆರೆಸಲು, ಸಮಾಜದಲ್ಲಿ ಅರಿವು ಮೂಡಿಸಿ ಅಂತರ್ಜಾತಿ ವಿವಾಹವನ್ನು ಜನಪ್ರಿಯಗೊಳಿಸಲು ಹಾಗೂ **ಅಂತರ್ಜಾತಿ ವಿವಾಹದ ಮುಂದಿನ ಗೊತ್ತು - ಗುರಿಗಳನ್ನು ಯೋಚಿಸಲು** ಪೂರಕವಾಗುವಂತೆ ಅಂತರ್ಜಾತಿ ವಿವಾಹಿತರ ಈ ಸಮಾವೇಶವನ್ನು ಏರ್ಪಡಿಸಿರುವುದಾಗಿ ವಿಚಾರವಾದಿ ವೇದಿಕೆ ತಿಳಿಸಿದೆ.

ಈ ಸಮಾವೇಶದಲ್ಲಿ ಅಂತರ್ಜಾತಿ ವಿವಾಹಿತರು ಮಾತ್ರವಲ್ಲದೆ, ಅಂತರ್ಜಾತಿ ವಿವಾಹವನ್ನು ಒಪ್ಪುವ, ಬೆಂಬಲಿಸುವ ಪ್ರಾಮಾಣಿಕ ಕಳಕಳಿಯುಳ್ಳ ಎಲ್ಲರೂ (ವಿವಾಹಿತರಿರಲಿ. ಅವಿವಾಹಿತರಿರಲಿ) ಪ್ರತಿನಿಧಿಗಳಾಗಿ ಭಾಗವಹಿಸಬಹುದೆಂದು ವೇದಿಕೆ ಪ್ರಕಟಿಸಿದೆ. ಪ್ರತಿನಿಧಿ ಶುಲ್ಕ **5 ರೂಪಾಯಿ** ಇರುತ್ತದೆ. ಪ್ರತಿನಿಧಿಗಳಿಗೆ ಊಟ, ವಸತಿ ಏರ್ಪಡಿಸಲಾಗಿದೆ.

### ಸ್ವಾಗತ ಸಮಿತಿ

ಈ ಸಮಾವೇಶದ ಏರ್ಪಾಡಿಗಾಗಿ ರಚಿತವಾಗಿರುವ ಸ್ವಾಗತ ಸಮಿತಿಗೆ ಶೃಂಗೇರಿಯ **ಡಾ|| ಕೆ. ರಾಮಚಂದ್ರ ರಾವ್** ಅಧ್ಯಕ್ಷರಾಗಿಯೂ, ಪತ್ರಕರ್ತ **ಕಲ್ಕುಳಿ ವಿಠಲ ಹೆಗ್ಡೆ** ಸಂಚಾಲಕರಾಗಿಯೂ, ಉದ್ಯಮಿ **ಕಲ್ಕಟ್ಟೆ ಗೋಪಾಲ ಹೆಗ್ಡೆ** ಖಜಾಂಚಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ. ಶೃಂಗೇರಿ, ಕೊಪ್ಪ, ನ ರಾ. ಪುರ ತಾ||ಗಳ ಹಲವು ಮಂದಿ ಅಂತರ್ಜಾತಿ ವಿವಾಹಿತರು ಮತ್ತು ವಿಚಾರವಂತರು ಸದಸ್ಯರಾಗಿದ್ದಾರೆ.

ಆಸಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಂಡು, ಸಮಾವೇಶದ ಉದ್ದೇಶವನ್ನು ಯಶಸ್ವಿಗೊಳಿಸಬೇಕಾಗಿ ವಿಚಾರವಾದಿ ವೇದಿಕೆ ಮತ್ತು ಸ್ವಾಗತ ಸಮಿತಿ ಮನವಿ ಮಾಡಿವೆ.

# ಬೈಕಲ್ಲಿ ಬಂದರು, ಕಡಿದು ಪರಾರಿಯಾದರು....

**ಕೊಪ್ಪ : ಬೈಕ್‌ನಲ್ಲಿ ಬಂದರು, ರಸ್ತೆಯಲ್ಲಿ ಬರುತ್ತಿದ್ದ ಯಾರನ್ನೋ ಗುರುತಿಟ್ಟು ಅಡ್ಡ ಹಾಕಿದರು, ಕತ್ತಿಯಿಂದ ಕಡಿದರು-ಕೊಚ್ಚಿದರು, ಹಾಡೇ ಹಗಲು ಸುತ್ತಮುತ್ತಲವರೆಲ್ಲ ತಲ್ಲಣಿಸಿ ನೋಡುತ್ತಿರುವಂತೆಯೇ ಬೈಕ್ ಹತ್ತಿ ವಾಯುವೇಗದಲ್ಲಿ ಕಣ್ಮರೆಯಾದರು.......**

ಸ್ವಲ್ಪ 'ಪಂಜಾಬ್' ಮಾದರಿಯದೆನ್ನಿಸುವ ಇಂಥದೊಂದು ಹಲ್ಲೆ ಕೊಪ್ಪದಲ್ಲಿ ಕಳೆದ 3 ತಿಂಗಳಲ್ಲಿ 2ನೇ ಬಾರಿಗೆ ಸೆ. 17ರಂದು ನಡೆದಿದೆ. ಜೂನ್ 18ರಂದು ಹಂಚಿಕೊಳಲು ಜಯಪ್ರಕಾಶ ಎಂಬವ ಪ್ರಕಾಶ್ ಭಂಡಾರಿ ಎಂಬವನ ಮೇಲೆ ಇದೇ ರೀತಿ ಹಲ್ಲೆ ನಡೆಸಿ ಪರಾರಿಯಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

### ಘಟನೆ

ಜಯಪುರದ ಬಳಿಯ ಆರದಾಳು ಚೆನ್ನೇಗೌಡರ ಮಗ ಹಾಗೂ ಜಯಪುರ ಮಂಡಲ ಪ್ರಧಾನ ಎ.ಸಿ. ವಜ್ರಪ್ಪ ಅವರ ತಮ್ಮ ಉಮೇಶ ಯಾನೆ ಸುಧಾ ಎಂಬ 25ರ ಯುವಕ ಈ ಬಾರಿ ಹಲ್ಲೆಗೀಡಾದ ವ್ಯಕ್ತಿ.

ಸೆ. 17ರ ಮಧ್ಯಾಹ್ನ 1 ಗಂಟೆಯ ಹೊತ್ತಿಗೆ ತಿಲಕ್ ರಸ್ತೆಯ ಮೆಸ್ ಒಂದರಲ್ಲಿ ತಾನು ಇಬ್ಬರು ಜೊತೆಗಾರರೊಡನೆ ಊಟ ಮುಗಿಸಿ ಬರುವಾಗ 2 ಬುಲೆಟ್ ಬೈಕ್‌ಗಳಲ್ಲಿ ಬಂದ ಕೃಪಾಲ, ಸಂಪತ್, ದೇವರಾಜ, ಸತೀಶ ಎಂಬವರು ಕತ್ತಿಯಿಂದ ಕಡಿದು ಕೊಚ್ಚಿ ಪರಾರಿಯಾದರು ಎಂದು ಉಮೇಶ ಪೋಲೀಸರಿಗೆ ನೀಡಿದ ದೂರಿನಲ್ಲಿ ತಿಳಿಸಿದ್ದಾನೆ.

ರಕ್ತದ ಮಡುವಿನಲ್ಲಿ ಬಿದ್ದಿದ್ದ ಅವನನ್ನು ಅನಂತರ ಪೋಲೀಸರ ಸಮ್ಮುಖದಲ್ಲಿ ಕೆಲವರು ಜೀಪಿನಲ್ಲಿ ಆಸ್ಪತ್ರೆಗೆ ಸಾಗಿಸಿದರು. ಇದೀಗ ಆತ ಮಣಿಪಾಲದ ಆಸ್ಪತ್ರೆಯಲ್ಲಿ ಚೇತರಿಸಿಕೊಳ್ಳುತ್ತಿದ್ದಾನೆನ್ನಲಾಗಿದೆ.

ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಮೇಲ್ಕಂಡ ನಾಲ್ವರ ಮೇಲೆ ಮೊಕದ್ದಮೆ ದಾಖಲಿಸಿ, ತನಿಖೆ ನಡೆಸುತ್ತಿದ್ದಾರೆ. ಈವರೆಗೆ ಯಾರನ್ನೂ ಬಂಧಿಸಿಲ್ಲ. ತರೀಕೆರೆ ಡಿವೈಎಸ್ಪಿ ರಮೇಶ್ ಹರಿಹರ ಕೊಪ್ಪಕ್ಕೆ ಭೇಟಿ ಕೊಟ್ಟಿದ್ದರು.

### ಹಿನ್ನೆಲೆ

ಹೇರೂರು ಪಂಚಾಯ್ತಿಯ ಮಾಜಿ ಅಧ್ಯಕ್ಷ ಎಚ್. ಪಿ. ಚಂದ್ರಯ್ಯ ಹೆಗ್ಗಡೆಯವರಿಗೂ ಈಗಿನ ಮಂಡಲ ಪ್ರಧಾನ

(4ನೇ ಪುಟಕ್ಕೆ)

## ಹುಬ್ಬಳ್ಳಿ-ಶೃಂಗೇರಿ ಬಸ್ ಸೆ. 20ರಿಂದ ಆರಂಭ ?

ಶೃಂಗೇರಿ : ಇಲ್ಲಿಂದ ಹುಬ್ಬಳ್ಳಿಗೆ ಓಡಾಡುವ ಸರ್ಕಾರಿ ಬಸ್ಸಿಗೆ ಸೆ. 20 ರಿಂದ ಓಡಾಟ ಆರಂಭಿಸಲು ಪರವಾನಗಿ ದೊರೆತಿರುವುದಾಗಿ ಹುಬ್ಬಳ್ಳಿಯ ವಿಭಾಗ ನಿಯಂತ್ರಣಾಧಿಕಾರಿ ಕೇಶವ ಮೂರ್ತಿ ಬಾಳೆಹೊನ್ನೂರಿನ ರಸ್ತೆ ಬಳಕೆದಾರರ ವೇದಿಕೆಗೆ ತಿಳಿಸಿದ್ದಾರೆ. ಈ ಬಸ್ಸಿನ ವೇಳಾಪಟ್ಟಿ ಇನ್ನೂ ತಿಳಿದು ಬಂದಿಲ್ಲ.

# ಛತ್ರ

(ಒಂದು ನೀತಿ ಕಥೆ)

★ ಲಿಯೋ ಟಾಲ್‌ಸ್ಟಾಯ್

ಧರ್ಮಶೀಲನಾದ ಉಪಕಾರ ಬುದ್ಧಿಯ ವ್ಯಕ್ತಿಯೊಬ್ಬ ಜನರಿಗೆ ಅದಷ್ಟು ಒಳ್ಳೆಯದು ಮಾಡಬೇಕೆಂದು ಬಯಸಿ ಯಾತ್ರಿಕರಿಗೆ, ದಾರಿಹೋಕರಿಗೆ ಅನ್ನ-ವಸತಿ ಸೌಕರ್ಯ ಕಲ್ಪಿಸುವ ಛತ್ರವೊಂದನ್ನು ಕಟ್ಟಿಸಿದ. ಛತ್ರದಲ್ಲಿ ವಿಶಾಲ ಕೊಠಡಿಗಳು, ಸುಸಜ್ಜಿತ ಅಡುಗೆ ಕೋಣೆ, ಆಹಾರ ದಾಸ್ತಾನು ಕೊಠಡಿ, ಮಂಚಗಳು, ಹಾಸಿಗೆಗಳು, ಬಗೆ ಬಗೆಯ ಉಡುಪುಗಳು– ಹೀಗೆ ಯಾತ್ರಿಕರಿಗೆ ಉಪಯುಕ್ತವಾಗುವ ಎಲ್ಲ ವಸ್ತುಗಳೂ ಇದ್ದುವು.

ಛತ್ರವನ್ನು ಜನ ಹೇಗೆ ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ಧರ್ಮಶೀಲ ನಿರ್ದಿಷ್ಟ ಸಲಹೆ ಸೂಚನೆ ನೀಡಿದ್ದ. ಸೂಚನೆಗಳನ್ನು ಬರೆದಿದ್ದ ಫಲಕವನ್ನು ಛತ್ರದ ಬಾಗಿಲಿನ ಮೇಲೆ ಮೊಳೆ ಹೊಡೆದು ಸಿಕ್ಕಿಸಿದ್ದ. ಒಳ ಬರುವವರೆಲ್ಲ ಅದನ್ನು ನೋಡದೆ ಇರಲು ಸಾಧ್ಯವಿಲ್ಲ. ಛತ್ರದಲ್ಲಿ ಒಬ್ಬ ಎಷ್ಟು ದಿನ ಬೇಕಾದರೂ ಇರಬಹುದು. ಮನದಣಿಯೆ ತಿಂದು ಕುಡಿದು ಆರಾಮವಾಗಿರಬಹುದು. ಅಲ್ಲಿರುವ ಪ್ರತಿಯೊಂದು ವಸ್ತುವನ್ನು ತನ್ನ ಮನಸ್ಸಿಗೆ ತೃಪ್ತಿಯಾಗುವವರೆಗೂ ಅನುಭವಿಸಬಹುದು. ಆದರೆ ಜನ ತಮ್ಮ ಅವಶ್ಯಕತೆಗೆ ಮೀರಿ ಅಲ್ಲಿದ್ದ ವಸ್ತುಗಳನ್ನು ಬಳಸಿ ಹಾಳು ಮಾಡಬಾರದು, ವೃಥಾ ಜಗಳ ಮಾಡಬಾರದು, ಛತ್ರವನ್ನು ಶುಚಿಯಾಗಿ ವ್ಯವಸ್ಥಿತವಾಗಿಟ್ಟುಕೊಳ್ಳಬೇಕು, ಮುಂತಾದ ಸೂಚನೆಗಳು ಫಲಕದಲ್ಲಿದ್ದುವು.

ಈ ವ್ಯವಸ್ಥೆ ಮಾಡಿದ ಬಳಿಕ ಧರ್ಮಶೀಲ ಛತ್ರದ ಹೊಣೆಗಾರಿಕೆಯಿಂದ ನಿವೃತ್ತನಾದ.

ಕಾಲಕ್ರಮೇಣ ಛತ್ರದಲ್ಲಿ ತಂಗಲು ಆಗಮಿಸುವ ಯಾತ್ರಿಕರು ಈ ಸೂಚನೆಗಳನ್ನು ಕಡೆಗಣಿಸಿದರು. ಸಿಕ್ಕಾಪಟ್ಟೆ ತಿಂದು ಕುಡಿದು ತೇಗಿದರು. ಸಹ ಯಾತ್ರಿಕರ ಹಿತವನ್ನು ಕಡೆಗಣಿಸಿ ತಮಗೆ ಅಗತ್ಯವಿಲ್ಲದಿದ್ದರೂ ಆಹಾರ ವಸ್ತುಗಳನ್ನು ಹಾಳುಗೆಡವಿದರು. ನಿತ್ಯ ಜಗಳ, ಬೈಗಳು, ಮಾರಾಮಾರಿ ಮುಂದುವರಿಯಿತು. ಪ್ರತಿಯೊಬ್ಬರಲ್ಲೂ ದುರಾಸೆ, ಸ್ವಾರ್ಥ ಭೂತಾಕಾರವಾಗಿ ಬೆಳೆಯಿತು,

ಹೀಗೆ ಅಲ್ಲಿರುವ ಎಲ್ಲವನ್ನೂ ಹಾಳು ಮಾಡಿದ ಬಳಿಕ ಅವರು ಹಸಿವೆಯಿಂದ ಪರಿತಪಿಸಿದರು. ಜಗಳದಲ್ಲಿ ಆದ ಗಾಯಗಳಿಂದ ಅವರಿಗೆ ಅತೀವ ಯಾತನೆಯಾಯಿತು. ಕೊನೆಗೆ ಅವರೆಲ್ಲರೂ ಧರ್ಮಶೀಲನನ್ನು ಬೈಯಲು ಶುರುಮಾಡಿದರು. ಛತ್ರದಲ್ಲಿ ತಮ್ಮ ಹೊಟ್ಟೆ ತುಂಬುವಷ್ಟು ಆಹಾರ ದೊರಕುತ್ತಿಲ್ಲ, ವಿಶ್ರಾಂತಿ ಪಡೆಯಲು ತಕ್ಕ ವ್ಯವಸ್ಥೆಯಿಲ್ಲ, ನೀಚವ್ಯಕ್ತಿಗಳಿಗೂ ಅಲ್ಲಿ ಪ್ರವೇಶವಿದೆ ಎಂದು ಬಗೆಬಗೆಯಲ್ಲಿ ತೆಗಳಲು ಪ್ರಾರಂಭಿಸಿದರು. ಯಾರನ್ನೂ ಬೈದು ಪ್ರಯೋ

(3ನೇ ಪುಟಕ್ಕೆ)

.... ಕಾಲಕ್ರಮೇಣ ಛತ್ರದಲ್ಲಿ ತಂಗಲು ಬರುವ ಯಾತ್ರಿಕರು ಛತ್ರವನ್ನು, ಅಲ್ಲಿರುವ ಎಲ್ಲವನ್ನೂ ಹಾಳುಗೆಡವಿದರು. ನಿತ್ಯ ಜಗಳ, ಬೈಗುಳ, ಮಾರಾಮಾರಿ ಮುಂದುವರಿಯಿತು.........

ಕೊನೆಗೆ ಅವರೆಲ್ಲರೂ ಧರ್ಮಶೀಲನನ್ನೇ ಬೈಯಲು ಶುರು ಮಾಡಿದರು........

## ಪದ್ಯದಂಕಣ

### ಚುಟುಕಗಳು

**ಫೋನು**

ಗಣಪತಿಯು ಮಾಡಿದ್ದ ನಿನ್ನೆ ಟೆಲಿಫೋನು
"ಗಡಿಬಿಡಿಲಿ ಇಲಿಯನ್ನು
ಕಳಕೊಂಡೆ ನಾನು
ಹೆಲಿಕಾಪ್ಟರ್ ನನಗಿರಲು ಬರುತಿದ್ದನೇನೊ
'ಮುಂಜಾವು' ಪತ್ರಿಕೆಗೆ ತಿಳಿಸಿಬಿಡು ನೀನು"

**ಕಾನೂನು**

ಜಾತಿಯನು ಬೆಂಬಲಿಸೆ ಅಪರಾಧ ಎಂದು
ಸರಕಾರ ಮಾಡಿಹುದು ಕಾನೂನು ಅಂದು
ಅರ್ಜಿಯಲಿ ಕೇಳುವರು "ನೀನಾವ ಜಾತಿ?"
ಅರ್ಥವಾಗದು ನಮಗೆ ಇದು ಯಾವ ರೀತಿ!

**ವಿಪರ್ಯಾಸ**

ಸಾರಿದರು ಮಂತ್ರಿಗಳು ಜಾತಿ–ಮತಗಳು
ಕೆಡುಕು
ಬೀಗಿದರು ಭಾಷಣದಿ ತೊಡೆಯಬೇಕೀ
ಒಡಕು
ಪರಜಾತಿ ಯುವಕ ಮಗಳ ವರಿಸಿದನೆಂದು
ಥಳಿಸಿದರು ಆತನನು ಕೀಳ್ಜಾತಿ ಎಂದು

—ಬಾಳೇಕುಂಡಿಗೆ ಪರಮೇಶ್ವರ್
ಬೀರೂರು.

## ಕೇರಳದಲ್ಲಿ ಶೇ. 10ರಷ್ಟು ಜನ ಅಂತರ್ಜಾತಿ ವಿವಾಹವಾದವರು

ಕೇರಳದ ಜನಸಂಖ್ಯೆಯಲ್ಲಿ ಶೇ. 10ರಷ್ಟು ಮಂದಿ ಅಂತರ್ಜಾತಿ ವಿವಾಹವಾದವರು ಮತ್ತು ಅವರ ಮಕ್ಕಳೆಂದು ಇತ್ತೀಚೆಗೆ ಕೇರಳ ಅಂತರ್ಜಾತಿ ವಿವಾಹ ಸಂಘವು ನಡೆಸಿದ ಸಮೀಕ್ಷೆಯೊಂದರಿಂದ ತಿಳಿದು ಬಂದಿದೆ. ಅಲೆಪ್ಪಿ ಜಿಲ್ಲೆಯಲ್ಲಿ ಅಂತರ್ಜಾತಿ ವಿವಾಹಗಳು ಗರಿಷ್ಠವಾದರೆ, ಮಲಪ್ಪುರಂ ಜಿಲ್ಲೆಯಲ್ಲಿ ಕನಿಷ್ಠ ಎಂದು ಸಮೀಕ್ಷೆ ತಿಳಿಸಿದೆ.

ಹಿಂದುಳಿದ, ಆದರೆ ಪ್ರಬಲ ಜಾತಿಯಾದ ಈಳವ (ಬಿಲ್ಲವ)ರಲ್ಲಿ ಅಂತರ್ಜಾತಿ ವಿವಾಹದ ಹೆಚ್ಚಳ ಕಂಡು ಬಂದಿದ್ದು, ಪುರುಷರು ಶೇ. 28ರಷ್ಟು ಹಾಗೂ ಮಹಿಳೆಯರು ಶೇ. 25ರಷ್ಟು ಅಂತರ್ಜಾತಿ ಮದುವೆಯಾಗಿದ್ದಾರೆ.

ಕ್ರೈಸ್ತರಲ್ಲಿ ಶೇ. 6ರಷ್ಟು ಗಂಡಸರು ಮಾತ್ರ ಅಂತರ್ಜಾತಿ ವಿವಾಹವಾದರೆ, ಮಹಿಳೆಯರು ಶೇ. 21ರಷ್ಟು ಆಗಿದ್ದಾರೆ.

ಮುಂದುವರಿದ ಹಾಗೂ ಪ್ರಬಲ ಜಾತಿಯಾದ ನಾಯರ್‌ಗಳಲ್ಲಿ ಅಂತರ್ಜಾತಿ ವಿವಾಹವಾದ ಪುರುಷರು ಶೇ. 11 ಹಾಗೂ ಮಹಿಳೆಯರು ಶೇ. 16ರಷ್ಟು.

ಮುಸ್ಲಿಮರಲ್ಲಿ ಅಂತರ್ಜಾತಿ ವಿವಾಹವು ಅತಿ ಕಡಿಮೆ. ಅವರಲ್ಲಿ ಶೇ. 1ರಷ್ಟು ಪುರುಷರು ಶೇ. 2ರಷ್ಟು ಮಹಿಳೆಯರು ಜಾತಿಯ ಹೊರಗೆ ಮದುವೆಯಾಗಿದ್ದಾರೆ.

(ಸೌಜನ್ಯ : 'ಮುಂಗಾರು')

## ಕುಟುಂಬ ಯೋಜನೆ ಬೆಂಬಲಿಸಲು ಖುರಾನಿನ 'ನೆರವು' ಪಡೆದ ಸಚಿವ

ತಾಂಜಾನಿಯಾದಲ್ಲಿ ಕುಟುಂಬ ಯೋಜನೆಯನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ತಾಂಜಾನಿಯಾದ ಸಚಿವರೊಬ್ಬರು ಸರಕಾರದ ಜನನ ನಿಯಂತ್ರಣ ಕಾರ್ಯಕ್ರಮಕ್ಕೆ ಬೆಂಬಲ ಸೂಚಿಸಲು ಈಚೆಗೆ ಖುರಾನಿನ ಶ್ಲೋಕವೊಂದನ್ನು ಉದ್ಧರಿಸಿದರು.

"ಮಕ್ಕಳ ಜನನದ ನಡುವೆ ಅಂತರ ಹೆಚ್ಚಿಸುವುದನ್ನು ನಿಷೇಧಿಸುವ ಯಾವ ನಿಯಮವೂ ಖುರಾನಿನಲ್ಲಿಲ್ಲ ಎಂದು ಜನಸಂಖ್ಯೆ ಮತ್ತು ಅಭಿವೃದ್ಧಿ ಕುರಿತ, ಹೆತ್ತವರ ರಾಷ್ಟ್ರೀಯ ವಿಚಾರಗೋಷ್ಠಿಯೊಂದರಲ್ಲಿ ಆರೋಗ್ಯ ಸಚಿವ ಮೌಲಿದ್ ಮಹಾನೆ ಹೇಳಿದರು.

**ನಾಲ್ಕು ತಿಂಗಳು ತುಂಬಿರುವ ಗರ್ಭವನ್ನು ನಿವಾರಿಸುವುದನ್ನು ಮಾತ್ರ ಖುರಾನ್ ನಿಷೇಧಿಸಿದೆ.** ನಾಲ್ಕು ತಿಂಗಳ ಗರ್ಭವು ಜೀವ ತುಂಬಿರುವುದೆಂದು ಪರಿಗಣಿಸಲ್ಪಟ್ಟಿರುವುದರಿಂದ ಅದನ್ನು ನಾಶಗೊಳಿಸುವುದೆಂದರೆ ಕೊಲೆ ನಡೆಸಿದಷ್ಟೇ ಕ್ರೂರ ಕೃತ್ಯವೆಂದು ಖುರಾನ್‌ನಲ್ಲಿ ಅಭಿಪ್ರಾಯಪಡಲಾಗಿದೆ. ಆದರೆ ಮಕ್ಕಳ ಜನನದಲ್ಲಿ ಅಂತರ ಹೆಚ್ಚಿಸುವುದನ್ನು ಖುರಾನ್‌ನಲ್ಲಿ ಎಲ್ಲೂ ವಿರೋಧಿಸಿಲ್ಲ.

ಕುಟುಂಬ ಯೋಜನೆಯನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ತಾಂಜಾನಿಯಾ ಸರಕಾರ ಹಾಕಿಕೊಂಡಿರುವ ಕಾರ್ಯಕ್ರಮ ಅನುಷ್ಠಾನಕ್ಕೆ ಕೆಲವು ಧಾರ್ಮಿಕ ನಂಬಿಕೆಗಳು ಅಡ್ಡಿಯಾಗುತ್ತಿರುವ ಬಗ್ಗೆ ತಾಂಜಾನಿಯಾ ಅಧಿಕಾರಿಗಳು ಕಳವಳಗೊಂಡಿದ್ದಾರೆಂದು ವರದಿಯಾಗಿದೆ.

ಈ ಸಂಗತಿಯೂ, ಸದರಿ ಸಚಿವರ ಈ ಪ್ರಯತ್ನವೂ ಭಾರತದ ಪರಿಸ್ಥಿತಿಯಲ್ಲಿ ಉಲ್ಲೇಖಾರ್ಹವಾಗಿ ಕಾಣುತ್ತವೆ. (ಸಾಧಾರ)

## "ಪ್ರತಿಭಾ ವಿಕಾಸಕ್ಕೆ ಪ್ರೋತ್ಸಾಹ ಅಗತ್ಯ"

—ಉದಯ್ ಹುತ್ತಿನಗದ್ದೆ

(ವರದಿ : ಎಂ. ವಿ. ಗಂಗಾಧರ್)

ಬಿಳಾಲ್‌ಕೊಪ್ಪ : ಯುವಜನರ ಪ್ರತಿಭೆ ವಿಕಾಸವಾಗಬೇಕಾದರೆ ಜನಸಾಮಾನ್ಯರ ಪ್ರೋತ್ಸಾಹ ಅತ್ಯಗತ್ಯ. ಮಲೆನಾಡಿನಲ್ಲಿ ಸರಿಯಾದ ಪ್ರೋತ್ಸಾಹ ಸಿಗದೆ ಎಷ್ಟೋ ಜನರ ಪ್ರತಿಭೆ ಕಮರಿ ಹೋಗುತ್ತಿದೆ ಆದ್ದರಿಂದ ಪ್ರತಿಭಾನ್ವಿತರನ್ನು ಗುರುತಿಸಿ ಗೌರವಿಸುವ ಜವಾಬ್ದಾರಿ ಜನಸಾಮಾನ್ಯರಿಗೆ ಸೇರಿದೆ ಎಂದು ಚಿತ್ರನಟ ಉದಯ್ ಹುತ್ತಿನಗದ್ದೆ ಇಲ್ಲಿ ಹೇಳಿದರು.

ಇಲ್ಲಿನ ಮೇರುತಿ ಜೇಸೀಸ್‌ನವರ ಸಪ್ತಾಹದ ಮುಕ್ತಾಯ ಸಮಾರಂಭದಲ್ಲಿ ತಮ್ಮನ್ನು ಸನ್ಮಾನಿಸಿದ್ದಕ್ಕೆ ಉತ್ತರಿಸಿ ಅವರು ಮಾತಾಡುತ್ತಿದ್ದರು.

ಈ ಸಂದರ್ಭದಲ್ಲಿ ಕೃಷಿ ಸಂಶೋಧನಾ ಕ್ಷೇತ್ರದಲ್ಲಿನ ಸಾಧನೆಗಾಗಿ ಡಾ॥ ಗೋಪಾಲಕೃಷ್ಣ ಹೆಬ್ಬಾರ್‌ರನ್ನೂ, ಕ್ರೀಡಾ ಪ್ರಗತಿಗಾಗಿ ಕೊಪ್ಪದ ಕು॥ ಜೆ. ಎಸ್. ಗೀತಾ ಅವರನ್ನು ಸನ್ಮಾನಿಸಲಾಯಿತು. ಜಿ. ಕೃಷ್ಣರಾವ್ ಸನ್ಮಾನ ನೆರವೇರಿಸಿದರು. ಜೇಸಿ ಅಧ್ಯಕ್ಷ ಬಿ. ರಮೇಶ್ ರಾವ್ ಅಧ್ಯಕ್ಷತೆ ವಹಿಸಿದ್ದು, ಮಂಡಲ ಪ್ರಧಾನ ಬಿ. ಎನ್. ಭಾಸ್ಕರ್ ಮುಖ್ಯ ಅತಿಥಿಯಾಗಿದ್ದರು.

**ರಂಜನೀಯ ವಾರ**

ಪ್ರತಿ ವರ್ಷ ಸೆ. 9ರಿಂದ 15ರವರೆಗೆ ನಡೆಯುವ 'ಜೇಸೀ ಸಪ್ತಾಹ' ಈ ಭಾಗದ ಹಳ್ಳಿಗಾಡಿನ ಜನತೆಗೆ ಉತ್ತಮವಾದ ರಂಜನೆಯನ್ನೊದಗಿಸುವ ಒಂದು ಸಂದರ್ಭವಾಗಿ ಬೆಳೆಯುತ್ತಿದೆ. ಈ ಬಾರಿಯೂ ಸಹ ವಿವಿಧ ಸ್ಪರ್ಧೆಗಳು, ಮನರಂಜನಾ ಕಾರ್ಯಕ್ರಮಗಳ ಜೊತೆಗೆ ಜಿಲ್ಲಾ ಮಟ್ಟದ ನಾಟಕ ಸ್ಪರ್ಧೆ ಸಹ ಏರ್ಪಟ್ಟಿತ್ತು. ಎನ್. ಎಲ್ ನಾಗಭೂಷಣ್ ಸಪ್ತಾಹದ ಯೋಜನಾ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು.

## ಸೆ. 23ರಂದು ಶಾಲೆ - ಕಾಲೇಜು ಬಂದ್ — ಎ. ಐ. ಎಸ್. ಎಫ್. ಚಳುವಳಿ

ಚಿಕ್ಕಮಗಳೂರು : ಎಲ್ಲಾ ಶಾಲೆ–ಕಾಲೇಜುಗಳಿಗೂ ಪೂರ್ಣ ಉಪನ್ಯಾಸಕರು ಮತ್ತು ಸಿಬ್ಬಂದಿಗಳ ನೇಮಕ, ಗ್ರಂಥಾಲಯ, ಪೀಠೋಪಕರಣ, ಪ್ರಯೋಗಶಾಲೆ, ಸ್ವಂತ ಕಟ್ಟಡ, ಆಟದ ಮೈದಾನ, ಶಾಲಾ-ಕಾಲೇಜುಗಳ ಸಮಯಕ್ಕೆ ಸರಿಯಾಗಿ ಬಸ್ಸಿನ ಸಂಪರ್ಕ ವ್ಯವಸ್ಥೆ — ಇವುಗಳಿಗಾಗಿ ಒತ್ತಾಯಿಸಿ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ಸೆ. 23ರಂದು ಜಿಲ್ಲೆಯ ಶಾಲೆ–ಕಾಲೇಜುಗಳನ್ನು ಬಂದ್ ಮಾಡುವ ಚಳುವಳಿ ನಡೆಸಲಿದೆ.

ಶಿಕ್ಷಣ ವ್ಯವಸ್ಥೆಯನ್ನು ಸುಸೂತ್ರವಾಗಿ ನಿರ್ವಹಿಸಬೇಕಾದ ಸರ್ಕಾರ ಅದನ್ನೊಂದು ವ್ಯಾಪಾರಿ ಕೇಂದ್ರವನ್ನಾಗಿ ಮಾಡಿ, ಕೇವಲ ನಿರುದ್ಯೋಗಿಗಳನ್ನು ತಯಾರು ಮಾಡುವ ಕಾರ್ಖಾನೆಯನ್ನಾಗಿ ಮಾರ್ಪಡಿಸಿದೆ. ಶಿಕ್ಷಣ ಸಂಸ್ಥೆಗಳಲ್ಲಿ ಸಿಬ್ಬಂದಿ, ಗ್ರಂಥಾಲಯ. ಪ್ರಯೋಗ ಶಾಲೆ ಮತ್ತಿತರ ಕನಿಷ್ಠ ಅಗತ್ಯಗಳ ಪೂರೈಕೆಗೂ ಹಣದ ಮುಗ್ಗಟ್ಟನ್ನು ಮುಂದು ಮಾಡುವ ಸರ್ಕಾರ ಮಂತ್ರಿ ಶಾಸಕರ, ಐ.ಎ.ಎಸ್. ಅಧಿಕಾರಿಗಳ ಸಂಬಳ–ಸೌಲತ್ತುಗಳಿಗೆ, ಯುದ್ಧೋಪಕರಣಗಳಿಗೆ ಹಣ ಸುರಿಯುತ್ತಿದೆ ಎಂದು ಎ.ಐ.ಎಸ್ ಎಫ್. ದೂರಿದೆ.

## ಓದುಗರ ಪತ್ರ

### ಸ್ಥಳೀಯ ಪತ್ರಿಕೆ ಬಟವಾಡೆ ಸಮರ್ಪಕವಾಗಿ ನಡೆಯಲಿ

ಮಾನ್ಯರೆ,

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವೃತ್ತ ಪತ್ರಿಕೆಗಳ ಪಾತ್ರ ಹಿರಿದಾಗಿದೆ. ಪತ್ರಕರ್ತರೆಲ್ಲ ಕೇವಲ ಜೀವನೋಪಾಯಕ್ಕಾಗಿ ಮಾತ್ರ ಕೆಲಸ ಮಾಡುವವರಾಗಿರದೆ, ಸಮಾಜ ಸೇವೆಯ ಹೊಣೆಗಾರಿಕೆಯೂ ಅವರ ಮೇಲಿರುತ್ತದೆ.

ಇಂಥ ಪತ್ರಿಕೆಗಳನ್ನು ಪಡೆಯಲು ಜನ ಕಾತುರರಾಗಿರುತ್ತಾರೆ. ಆದರೆ ಅವುಗಳ ಬಟವಾಡೆಯಲ್ಲಿ, ಮುಖ್ಯವಾಗಿ ಸ್ಥಳೀಯ ಪತ್ರಿಕೆಗಳನ್ನು ಓದುಗರಿಗೆ ಸರಿಯಾಗಿ ತಲುಪಿಸುವಲ್ಲಿ ಅಂಚೆ ಇಲಾಖೆಯ ಕೆಲವು ಕಚೇರಿಗಳ ಮುತುವರ್ಜಿ ಏನೇನೂ ಸಾಲದೆನ್ನಿಸುತ್ತದೆ.

ಇನ್ನಾದರೂ ಅಂಚೆ ಇಲಾಖೆ ಈ ಬಗ್ಗೆ ಸೂಕ್ತ ಗಮನ ನೀಡಲಿ.

—ಎಂ. ವಿ. ಗಂಗಾಧರ್
ಗುಡ್ಡೇತೋಟ.

ನ.ರಾ. ಪುರ ಕಿರಿಯ ಕಾಲೇಜು ಪ್ರಿನ್ಸಿಪಾಲ್ ಮೇಲೆ

## ಸ್ವಜನ ಪಕ್ಷಪಾತ, ದುರಾಡಳಿತದ ಆರೋಪ

(ವರದಿ: ಎಂ. ಐ. ಶ್ರೀನಿವಾಸಮೂರ್ತಿ)

ನ. ರಾ. ಪುರ :- ಇಲ್ಲಿನ ಕಿರಿಯ ಕಾಲೇಜು ಪ್ರಿನ್ಸಿಪಾಲರಾದ ಎಚ್. ಪಿ. ನಂಜುಂಡ ಭಟ್ಟ ಅವರ ಮೇಲೆ ಹಣ ದುರುಪಯೋಗ, ಸ್ವಜನ ಪಕ್ಷಪಾದ, ದುರಾಡಳಿತ, ಜಾತೀಯವಾದ ಮುಂತಾದ ಆರೋಪಗಳನ್ನು ಮಾಡಿ ಶಿಕ್ಷಣ ಸಚಿವರು, ಸಾ. ಶಿ. ಇಲಾಖೆಯ ನಿರ್ದೇಶಕರು, ಕಮಿಶನರು ಹಾಗೂ ಲೋಕಾಯುಕ್ತಕ್ಕೆ ದೂರು ನೀಡಲಾಗಿದೆಯೆಂದು ತಿಳಿದು ಬಂದಿದೆ.

ಅಧ್ಯಾಪಕರುಗಳ ಮೇಲೆ ತಮ್ಮ ಹಸ್ತಕರಾದ ಕೆಲ ವಿದ್ಯಾರ್ಥಿಗಳಿಂದ ಸುಳ್ಳು ದೂರು ಬರೆಸಿ ಕಿರುಕುಳ ಕೊಡುವುದು, ಪ್ರತಿಭಟಿಸುವ ಅಥವಾ ನ್ಯಾಯ ಕೇಳುವ ಅಧ್ಯಾಪಕರಿಗೆ "ಶೃಂಗೇರಿ ಶಾಸಕರಿಗೆ ಹೇಳಿ ನಿಮ್ಮನ್ನು ಬೇಕಾದಲ್ಲಿಗೆ ವರ್ಗ ಮಾಡಿಸುತ್ತೇನೆ. ಇಲ್ಲವಾದರೆ ನಾನು ಪ್ರಿನ್ಸಿಪಾಲನೇ ಅಲ್ಲ" ಎಂದು ಪಣ ತೊಟ್ಟು ಬೆದರಿಕೆ ಹಾಕುವುದು ಮುಂತಾದ ಅಂಶಗಳೂ ದೂರಿನಲ್ಲಿವೆ.

ಅನಧಿಕೃತ ಹಣ ವಸೂಲಿ, ನಕಲಿ ರಶೀದಿ ಕೊಟ್ಟು ಹಣ ಸಂಗ್ರಹಿಸುವುದು, ಮೇಲಧಿಕಾರಿಗಳು ತನಿಖೆಗೆ ಬಂದಾಗ ಖರ್ಚಿಗೆ ಹಣ ಬೇಕೆಂದು ವಸೂಲಿ ಮಾಡುವುದು, ಸ್ಕಾಲರ್‌ಶಿಪ್ ಬಂದ ವಿದ್ಯಾರ್ಥಿಗಳಿಂದ ಮತ್ತು ಶೀಲ ಪತ್ರ ಕೊಡುವಾಗಲೆಲ್ಲ ಹಣ ಪಡೆಯುವುದು—ಮುಂತಾದ ಆರೋಪಗಳನ್ನೂ ಮಾಡಲಾಗಿದೆ.

ಸುಮಾರು 25 ವರ್ಷಗಳಿಂದ ಇಲ್ಲಿ ಉಪನ್ಯಾಸಕರಾಗಿದ್ದು 85 ರಲ್ಲಿ ಪ್ರಿನ್ಸಿಪಾಲರಾಗಿ ಬಡ್ತಿ ಹೊಂದಿ ವರ್ಗಾವಣೆಯಾದರೂ ಅದನ್ನು ಉಲ್ಲಂಘಿಸಿ (?) ತಮ್ಮ ಸ್ವಂತ ಊರಾದ ಇಲ್ಲೇ ಮುಂದುವರಿದಿದ್ದಾರೆ ಎಂಬುದೂ ಆರೋಪದಲ್ಲಿದೆ.

ವಿದ್ಯಾರ್ಥಿ ಸಂಘದ 1100 ರೂ. ಹಣವನ್ನೂ, ಸಿಬ್ಬಂದಿಗಳ ಕೆ.ಜಿ.ಐ.ಡಿ., ಆರ್. ಡಿ., ರಾ. ಉಳಿತಾಯದ ಹಣ ಮುಂತಾದುವನ್ನು ಅನಧಿಕೃತವಾಗಿ ತಮ್ಮ ಬಳಿ ಇಟ್ಟುಕೊಂಡು ದುರುಪಯೋಗಪಡಿಸಿಕೊಂಡಿದ್ದಾರೆ ಎಂದು ಸಹ ಆರೋಪಿಸಲಾಗಿದೆ.

ಈ ಬಗ್ಗೆ ಉನ್ನತ ಅಧಿಕಾರಿಗಳಿಂದ ಈಚೆಗೆ ತನಿಖೆ ನಡೆಯುವ ಸುದ್ದಿ ಹರಡಿತ್ತಾದರೂ ಈವರೆಗೂ ಯಾವುದೇ ತನಿಖೆ ನಡೆದಿಲ್ಲವೆನ್ನಲಾಗಿದೆ.

## ಸಿ. ಪಿ. ಐ. ನಿಂದ ಸೆ.25ರಂದು ತಾ|| ಕಚೇರಿಗಳ ಪಿಕೆಟಿಂಗ್

ಕೊಪ್ಪ : ಚಿಕ್ಕಮಗಳೂರು ಜಿಲ್ಲೆಯ ಕಾಮೇನಹಳ್ಳಿಯಲ್ಲಿ ಹತ್ತಿಪ್ಪತ್ತು ವರ್ಷಗಳಿಂದ ಬಡರೈತರು ಸಾಗುವಳಿ ಮಾಡುತ್ತಿರುವ ಸುಮಾರು 200 ಎಕರೆ ಜಮೀನನ್ನು ಅರಣ್ಯ ಇಲಾಖೆ ಈಚೆಗೆ ನೆಲಸಮ ಮಾಡಿ ನೀಲಗಿರಿ ಬೆಳೆಸುತ್ತಿರುವುದನ್ನು ಪ್ರತಿಭಟಿಸಿ ಅಲ್ಲಿನ ರೈತರು ಭಾರತ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಚಳುವಳಿ ನಡೆಸುತ್ತಿದ್ದು, ಇದಕ್ಕೆ ಬೆಂಬಲವಾಗಿ ಪಕ್ಷದ ಎಲ್ಲಾ ತಾ|| ಘಟಕಗಳು ಸೆ. 25ರಂದು ತಾ|| ಕಚೇರಿಗಳ ಮುಂದೆ ಧರಣಿ ನಡೆಸಲಿವೆ. ಜಿಲ್ಲೆ ಬರ ಪೀಡಿತವಾಗಿರುವುದರಿಂದ ರೈತರ ಕಂದಾಯ ಮತ್ತು ಸಾಲಗಳನ್ನು ಮನ್ನಾ ಮಾಡಲು ಸಹ ಈ ಸಂದರ್ಭದಲ್ಲಿ ಒತ್ತಾಯಿಸಲಾಗುವುದು.

## ಖೋಟಾ ಇಂಜಿನಿಯರ್?

ಜಯಪುರ : ತಾನೊಬ್ಬ ಸಣ್ಣ ನೀರಾವರಿ ಇಲಾಖೆಯ ಇಂಜಿನಿಯರ್, ತನ್ನ ಹೆಸರು ಎಲ್. ರಾಮೇಗೌಡ ಎಂದು ಹೇಳಿಕೊಂಡ ವ್ಯಕ್ತಿಯೊಬ್ಬ ಇಲ್ಲಿಗೆ ಸಮೀಪದ ಹುಲಿಗರಡಿಯ ಗಿರಿಜನರಿಂದ ದುಡ್ಡು ಕೀಳಲು ಹವಣಿಸಿದ ಬಗ್ಗೆ ಅವರುಗಳು ದೂರು ನೀಡಿದ್ದಾರೆ.

ಬಾವಿ, ಪಂಪ್ ಸೆಟ್ ವಗೈರೆ 25,000 ರೂ ವರೆಗೂ ಸಾಲ ಸೌಲಭ್ಯ ಕೊಡಿಸುವುದಾಗಿಯೂ, ತನಗೆ ಒಬ್ಬೊಬ್ಬರೂ 1000 ರೂ. ನೀಡಬೇಕೆಂದೂ ಈತ ಕೇಳಿದ್ದನೆನ್ನಲಾಗಿದೆ. ಕೆಲವರಿಂದ ಹತ್ತಿಪ್ಪತ್ತು ರೂ. ಸಂಗ್ರಹಿಸಿದ್ದು, ಮಿಕ್ಕ ಹಣದ ವಸೂಲಿಯ ಯತ್ನದಲ್ಲಿದ್ದಾಗ ಸಂಶಯಗೊಂಡು ವಿವರಣೆಗಳನ್ನು ಕೇಳತೊಡಗಿದೊಡನೆ ಈತ ನೆಪ ಹೇಳಿ ತಪ್ಪಿಸಿಕೊಂಡನೆನ್ನಲಾಗಿದೆ.

ಈತನ ವಿರುದ್ಧ ಬೇರೆ ಕಡೆಗಳ ದುರ್ಬಲ ವರ್ಗಗಳವರು (ಆತ ಅವರುಗಳ ಹತ್ತಿರವೇ ಹೋಗುವ ಸಂಭವ ಇರುವುದರಿಂದ) ಎಚ್ಚರದಿಂದಿರಬೇಕೆಂದು ಈ ಗಿರಿಜನರು ತಿಳಿಸಿದ್ದಾರೆ.

ಬೇಗಾರಿನ ಮುರುಕು ಸೇತುವೆ ಬದಲಿಗೆ

## 20 ಲಕ್ಷ ರೂ. ವೆಚ್ಚದ ಸೇತುವೆ ಮಂಜೂರು

ಕೊಪ್ಪ: ಈಗ್ಗೆ ಆರೇಳು ವರ್ಷಗಳ ಹಿಂದೆ ಜಖಂಗೊಂಡು, ದೊಡ್ಡ ವಾಹನಗಳ ಸಂಚಾರ ಅಸಾಧ್ಯವಾಗಿರುವ ಬೇಗಾರಿನ ಮಾಲತಿ ನದಿ ಸೇತುವೆಗೆ ಬದಲು 20 ಲಕ್ಷ ರೂ. ವೆಚ್ಚದ ಹೊಸ ಸೇತುವೆಗೆ ಮಂಜೂರಾತಿ ದೊರೆತಿದೆ. ಈಗಿನ ಸೇತುವೆಯ ಬಳಿಯ ತಿರುವನ್ನು ತಪ್ಪಿಸಿ ನೇರವಾಗಿ ಹೊಳೆ ದಾಟುವಂತೆ ಹೊಸ ರಸ್ತೆ ನಿರ್ಮಾಣವು ಇದರಿಂದ ಸಾಧ್ಯವಾಗಲಿದ್ದು, ಉದ್ದೇಶಿತ ಮಾಲತಿ ಅಣೆಕಟ್ಟೆನಿಂದ ಸಹ ಈ ಸೇತುವೆ ಮುಳುಗುವ ಸಂಭವವಿಲ್ಲವೆಂದು ಲೋ|| ಇಲಾಖೆ ಸ|| ಎ|| ಇಂಜಿನಿಯರ್ ಕೆ. ಪಿ. ಚಿನ್ನಪ್ಪ ಹೆಗ್ಡೆ ತಿಳಿಸಿದ್ದಾರೆ.

### ಕಾಲೇಜು ಕಟ್ಟಡಗಳು

ಕೊಪ್ಪದ ಕಿರಿಯ ಕಾಲೇಜು ಮತ್ತು ಪ್ರ. ದ. ಕಾಲೇಜಿನ ವಿಸ್ತರಣಾ ಕಟ್ಟಡಗಳ ನಿರ್ಮಾಣ ಇಷ್ಟರಲ್ಲೇ ಆರಂಭವಾಗಲಿದೆಯೆಂದು ಅವರು ತಿಳಿಸಿದ್ದಾರೆ.

ಪ್ರ.ದ. ಕಾಲೇಜಿನ ಕಟ್ಟಡದ ಅಂದಾಜು ವೆಚ್ಚ 16 ಲಕ್ಷ ರೂ. ಆಗಿದ್ದು, ಉತ್ತಮ ಕಂಟ್ರಾಕ್ಟರೆಂಬ ಖ್ಯಾತಿಯ ಶಿವಯ್ಯರ್ ಅವರಿಗೆ ಈ ಕಂಟ್ರಾಕ್ಟ್ ದೊರೆತಿದೆ. 3.5 ಲಕ್ಷ ರೂ. ವೆಚ್ಚದ ಕಿರಿಯ ಕಾಲೇಜು ಕಟ್ಟಡದ ಗುತ್ತಿಗೆ ಕಾಡಪ್ಪ ಗೌಡರಿಗೆ ಸಿಕ್ಕಿದೆ.

## ಛತ್ರ

(2ನೇ ಪುಟದಿಂದ)

ಜನವಿಲ್ಲ, ಈ ಛತ್ರ ತನ್ನಿಂದ ತಾನೇ ಹುಟ್ಟಿಕೊಂಡಿತು. ಆದುದರಿಂದ ಈ ಸ್ಥಳವೇ ತುಂಬ ಕೆಟ್ಟದು ಎಂದು ಸ್ಥಳವನ್ನು ಬೈದರು.

ಇದೇ ರೀತಿ ಇಂದು ಜಗತ್ತಿನಲ್ಲಿ ನಾವು ವಿವೇಕದ ಮಾತುಗಳಿಗೆ ಕಿವಿಗೊಡುವುದಿಲ್ಲ. ನಮ್ಮ ಬದುಕನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸುವ ವಿವೇಕದ ಮಾತುಗಳನ್ನು ನಾವು ಕಡೆಗಣಿಸುತ್ತಿದ್ದೇವೆ. ಮಾನವ ಕುಲದ ಮಹಾನ್ ಚಿಂತಕರು ಸಾರಿ ಹೇಳಿದ ದಿವ್ಯ ಬೋಧನೆಗಳನ್ನು ಕಡೆಗಣಿಸುತ್ತಿದ್ದೇವೆ. ಹೀಗೆ ನಮ್ಮ ಕ್ಷಣಿಕ ಜೀವನವನ್ನು ನಾವೇ ನಾಶಗೊಳಿಸುತ್ತಿದ್ದೇವೆ. ಇತರರ ಬದುಕನ್ನು ಹಾಳು ಮಾಡುತ್ತಿದ್ದೇವೆ. ಎಲ್ಲದಕ್ಕೂ ದೇವರನ್ನು, ಪ್ರಪಂಚವನ್ನು ದೂರುತ್ತೇವೆ.

ನಮ್ಮ ಉದ್ಧಾರ ನಮ್ಮ ಕೈಯಲ್ಲಿದೆ ನಮ್ಮ ಸಂರಕ್ಷಣ ಸಂಕಲ್ಪವನ್ನು ನಾವು ಈಡೇರಿಸಿದರೆ ಅಪೂರ್ವ ಮನಶ್ಯಾಂತಿ, ಕಲ್ಪಿಸಲೂ ಸಾಧ್ಯವಾಗದ ಮನಶ್ಯಾಂತಿ ನಮಗೆ ಲಭಿಸುತ್ತದೆ.

(ಸೌಜನ್ಯ : "ಸೋವಿಯೆತ್ ಸಾಹಿತ್ಯ ವಿಶೇಷ")

## ಕೊಪ್ಪ ತಾ|| ಧಾರ್ಮಿಕ ಸಮ್ಮೇಳನ

ಕೊಪ್ಪ: ಈ ತಾಲ್ಲೂಕಿನ ಶೇ. 90 ಭಾಗ ದೇವಸ್ಥಾನಗಳಿಗೆ ಆಸ್ಥೈರು ತಸ್ತೀಕ್ ಹಣ ಮಂಜೂರಾಗಿ 31 ದೇವಸ್ಥಾನಗಳಿಗೆ ಹಣ ಬಂದಿದೆಯಾದರೂ ಅಧಿಕಾರಿಗಳು ಸಣ್ಣ ಉಳಿತಾಯ, ಸ್ಟ್ಯಾಂಪು ಮತ್ತಿತರ ನೆಪಗಳನ್ನೊಡ್ಡಿ ಹಣ ಪಾವತಿಸುತ್ತಿಲ್ಲ. ತಾಲ್ಲೂಕಿನ ದೇವಸ್ಥಾನಗಳ ಪರಿಸ್ಥಿತಿ ಅರಿಯಲು ರಾಜ್ಯದ ಧಾರ್ಮಿಕ-ದತ್ತಿ ಸಚಿವ ಅಮರನಾಥ ಶೆಟ್ಟಿ ಸೆಪ್ಟೆಂಬರ್ 3ನೇ ಅಥವಾ ಅ. 2ನೇ ವಾರ ಭೇಟಿ ನೀಡುವುದಾಗಿ ತಿಳಿಸಿದ್ದು, ಆ ಸಂದರ್ಭದಲ್ಲಿ ಒಂದು ಧಾರ್ಮಿಕ ಸಮ್ಮೇಳನವನ್ನು ನಡೆಸಲು ತೀರ್ಮಾನಿಸಿರುವುದಾಗಿ ತಾ|| ಧಾರ್ಮಿಕ ಸಂಸ್ಥೆಗಳ ಸಂಚಾಲಕರ ಸಮಿತಿ ತಿಳಿಸಿದೆ.

## ಕೊಪ್ಪ, ನ. ರಾ. ಪುರಕ್ಕೆ ಸೆ.22 ಶಾಸಕ ಭೂಪತಿ ಭೇಟಿ

ಕೊಪ್ಪ :- ಕಮ್ಯುನಿಸ್ಟ್ ಶಾಸಕ ಭೂಪತಿ, ರಾಜ್ಯ ಮಂಡಳಿ ಸಹ ಕಾರ್ಯದರ್ಶಿ ಪಿ. ರಾಮನ್ ಮತ್ತು ಜಿಲ್ಲಾ ಕಾರ್ಯದರ್ಶಿ ಬಿ. ಕೆ. ಸುಂದರೇಶ್ ಅವರುಗಳು ಕೊಪ್ಪ ಮತ್ತು ನ. ರಾ. ಪುರ ತಾ||ಗಳಲ್ಲಿ ಬರ ಪೀಡಿತ ಪ್ರದೇಶಗಳಿಗೆ ಭೇಟಿ ನೀಡುವರು.

ಅನಂತರ ಬೆಳಿಗ್ಗೆ 11 ಕ್ಕೆ ನ.ರಾ.ಪುರದಲ್ಲೂ ಸಂಜೆ 5ಕ್ಕೆ ಕೊಪ್ಪದಲ್ಲೂ ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಿ, ಬರಪೀಡಿತ ಪ್ರದೇಶಗಳಲ್ಲಿ ಉದ್ಯೋಗ, ಆಹಾರ ಧಾನ್ಯ, ನೀರು, ಮೇವು ಒದಗಿಸುವುದು, ಕಾರ್ಮಿಕರ ಕನಿಷ್ಠ ಕೂಲಿ ಪುನರ್ ವಿಮರ್ಶೆ ಮುಂತಾದ ಬೇಡಿಕೆಗಳ ಬಗ್ಗೆ ಭಾಷಣ ಮಾಡುವರು ಎಂದು ಪ್ರಕಟಣೆಯಲ್ಲಿ ತಿಳಿಸಲಾಗಿದೆ.

## ಯಕ್ಷಗಾನ ತಾಳಮದ್ದಲೆ

ಯಕ್ಷರಂಗದ ಹಿರಿಯ ಕಲಾವಿದರ ಅಪೂರ್ವ ಸಮ್ಮಿಲನ

ತಾ|| 26-9-1987ನೇ ಶನಿವಾರ ರಾತ್ರಿ ಘಂಟೆ 9-30ರಿಂದ

ಸ್ಥಳ : ಉತ್ತಮೇಶ್ವರ ಸ್ವಾಮಿ ಸನ್ನಿಧಿಯಲ್ಲಿ
ಉತ್ತಮೇಶ್ವರ, ಕೊಪ್ಪ ತಾಲ್ಲೂಕು

ಹಿಮ್ಮೇಳದಲ್ಲಿ :— ಸರ್ವಶ್ರೀ ಪದ್ಯಾಣ ಗಣಪತಿ ಭಟ್ಟ, ಜಯರಾಮ ಕುಪ್ಪೆತ್ತಾಯ, ಸೀತಾರಾಮ ತೋಳ್ಪಾಡಿತ್ತಾಯ, ಮುಂತಾದವರು

ಅರ್ಥಧಾರಿಗಳಾಗಿ :— ಸರ್ವಶ್ರೀ ಶೇಣಿ ಗೋಪಾಲಕೃಷ್ಣ ಭಟ್ ಹರಿದಾಸ್,
ಗೋವಿಂದ ಭಟ್ ಹರಿದಾಸ್,
ಎಂ. ಪ್ರಭಾಕರ ಜೋಶಿ, ಎಂ. ಕಾಂ.,
ಕುಂಬ್ಳೆ ಸುಂದರರಾವ್ ಮತ್ತಿತರರು.

ತಮ್ಮೆಲ್ಲರಿಗೂ ಆದರದ ಆಮಂತ್ರಣ

(ವಿ. ಸೂ : ಈ ಮೊದಲು ಪ್ರಚುರ ಪಡಿಸಿದಂತೆ ಈ ಕಾರ್ಯಕ್ರಮ ತಾ. 22ರಂದು ನಡೆಯುವುದಿಲ್ಲ.)

# ನೆಮ್ಮಾರು 'ದ್ವಾಕ್ರಾ' ಘಟಕದ ಫಲಾನುಭವಿಗಳ ಚಳುವಳಿ ಸೆ. 25 ರವರೆಗೆ ತಾತ್ಕಾಲಿಕ ನಿಲುಗಡೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

**ಶೃಂಗೇರಿ: ನೆಮ್ಮಾರಿನ ಸುಧಾರಿತ ತಳಿ ಹಂದಿ ಸಾಕಣೆಯ 'ದ್ವಾಕ್ರಾ' ಘಟಕದ ಫಲಾನುಭವಿಗಳು ದಲಿತ ಸಂಘರ್ಷ ಸಮಿತಿ ನೇತೃತ್ವದಲ್ಲಿ ಸೆ. 15ರಿಂದ ಇಲ್ಲಿನ ಬಿಡಿಒ ಕಚೇರಿ ಎದುರು ನಡೆಸುತ್ತಿದ್ದ ಧರಣಿ ಸತ್ಯಾಗ್ರಹವನ್ನು ಸೆ 25ರ ವರೆಗೆ ತಾತ್ಕಾಲಿಕವಾಗಿ ನಿಲ್ಲಿಸಲಾಗಿದೆ.**

ಸೆ. 18ರಂದು ಈ ಘಟಕದ ಲೆಕ್ಕ ಪತ್ರಗಳ ತನಿಖೆಯನ್ನು ಜಿಲ್ಲಾ ಪರಿಷತ್ ವತಿಯಿಂದ ಬಂದಿರುವ ಆಡಿಟರ್‌ಗಳು ಆರಂಭಿಸಿದ್ದು, 24 ರೊಳಗೆ ವರದಿ ನೀಡುವುದಾಗಿ ಒಪ್ಪಿಕೊಂಡಿರುವುದಲ್ಲದೆ, 25ರಂದು ಜಿಲ್ಲಾ ಪರಿಷತ್ ಸಭೆಯಲ್ಲಿ ಈ ವಿಚಾರ ಚರ್ಚೆಗೆ ಬರಲಿರುವುದರಿಂದ ಈ ನಿರ್ಧಾರ ಕೈಗೊಳ್ಳಲಾಗಿದೆ.

### ಹುಸಿಯಾದ ಭರವಸೆ

ಹಣಕಾಸಿನ ಅವ್ಯವಹಾರ ಬೆಳಕಿಗೆ ಬಂದು 2 ತಿಂಗಳಿಗೂ ಹೆಚ್ಚು ಕಾಲವಾದರೂ ತೃಪ್ತಿಕರವಾದ ತನಿಖಾ ಕ್ರಮ ಕೈಗೊಳ್ಳದಿದ್ದುದನ್ನು ಪ್ರತಿಭಟಿಸಿ ಹಾಗೂ ಘಟಕವನ್ನು ಮುಂದುವರಿಸುವಂತೆ ಒತ್ತಾಯಿಸಿ ಫಲಾನುಭವಿಗಳು ಸೆ. 7ರಂದು ನೆಮ್ಮಾರಿನ ಚಿ. ಕೊ. ಗ್ರಾಮೀಣ ಬ್ಯಾಂಕ್ ಶಾಖೆಯೆದುರು ಸಾಂಕೇತಿಕ ಚಳುವಳಿ ನಡೆಸಿದ್ದರು.

ಅದರ ಪರಿಣಾಮವಾಗಿ, ಜಿಲ್ಲಾ ಪರಿಷತ್ತಿನಲ್ಲಿ 'ದ್ವಾಕ್ರಾ' ಯೋಜನೆಯ ಉಸ್ತುವಾರಿ ನೋಡಿಕೊಳ್ಳುವ ಉಪ ಕಾರ್ಯದರ್ಶಿ ಶ್ರೀಮತಿ ರಮಾ ನಾಯಕ್ ಸೆ. 14 ರಂದು ಭೇಟಿ ನೀಡಿ, ತಕ್ಷಣ ಆಡಿಟರ್‌ಗಳನ್ನು ಕಳಿಸುವ ಭರವಸೆ ಇತ್ತಿದ್ದರು.

ಆದರೆ ಅವರು ಬರದಿದ್ದುದರಿಂದ, ದ.ಸಂ. ಸಮಿತಿ ಆ ಮೊದಲೇ ನಿರ್ಧರಿಸಿದ್ದಂತೆ ಸೆ. 15ರಿಂದ ಚಳುವಳಿಯನ್ನು ತೀವ್ರಗೊಳಿಸಿತ್ತು.

### ಶಾಸಕರ ಭೇಟಿ

ಸೆ. 16ರಂದು ಭೇಟಿ ಕೊಟ್ಟ ಶಾಸಕ ಗೋವಿಂದ ಗೌಡರು, ಈ ವಿಚಾರದಲ್ಲಿ ಸರ್ಕಾರದ ಮೂಲಕ ತಮ್ಮಿಂದಾಗುವ ಎಲ್ಲ ಕ್ರಮ ಕೈಗೊಳ್ಳುವ ಭರವಸೆ ನೀಡಿ, ಸೆ. 25ರ ಜಿ. ಪ. ಸಭೆಯಲ್ಲಿ ಈ ವಿಚಾರ ಚರ್ಚೆಗೆ ಮಂಡಿಸಲು ಕ್ರಮ ಕೈಗೊಳ್ಳುವಂತೆ ಬಿಡಿಒಗೆ ಸೂಚಿಸಿದರು. ಅಲ್ಲದೆ ಜಿ. ಪ. ಮುಖ್ಯ ಕಾರ್ಯದರ್ಶಿಯನ್ನು ತಕ್ಷಣ ಪರಿಶೀಲನೆಗಾಗಿ ಕಳಿಸಿಕೊಡುವ ಭರವಸೆಯಿತ್ತರು.

### ಜಿ. ಪ. ಕಾರ್ಯದರ್ಶಿಗೆ ಘೇರಾವ್

ಸೆ. 17ರಂದು ಮುಖ್ಯ ಕಾರ್ಯದರ್ಶಿ ಪಿ. ಎಸ್. ವಿ. ರಾವ್ ಬಂದು, ಈ ವಿಚಾರ ತನಗೇನೂ ಗೊತ್ತಿರಲಿಲ್ಲ. ಮುಂತಾಗಿ ನುಣುಚಿಕೊಳ್ಳುವ ಯತ್ನ ನಡೆಸಿದರು. ಆಗ ಫಲಾನುಭವಿಗಳು ದ. ಸಂ. ಸ. ಕಾರ್ಯಕರ್ತರಾದ ಕೆ. ಎಂ. ಗೋಪಾಲ್, ರಾಮಣ್ಣ, ಕಾಳಪ್ಪ, ಕಾಳಯ್ಯ (ನೆಮ್ಮಾರು ಮಂಡಲ ಉಪ ಪ್ರಧಾನರು) ಹಾಗೂ ನೆಮ್ಮಾರು ಮಂ. ಪ್ರಧಾನ ಎಂ.ಜಿ. ಸುಧಾಕರ ಹೆಗ್ಡೆ ಇವರುಗಳ ನೇತೃತ್ವದಲ್ಲಿ ಅವರಿಗೆ ಪ್ರಶ್ನೆಗಳ ಸುರಿಮಳೆಗರೆದರು; ಅವರ ಹಿಂದಿನ ಹೇಳಿಕೆಗಳ ಬಗ್ಗೆ ಸ್ಪಷ್ಟನೆ ಕೇಳಿ, ವಾಗ್ದಾಣಗಳಿಂದ ತತ್ತರಿಸುವಂತೆ ಮಾಡಿದರು; ಈ ವರೆಗೂ ಯಾಕೆ ತನಿಖೆ ಏರ್ಪಡಿಸಲಿಲ್ಲ? ಎಂದು ಸಮಜಾಯಿಷಿ ಕೇಳಿದರು.

"ನಾಳೆ-ನಾಡಿದ್ದರಲ್ಲಿ ಆಡಿಟರ್‌ಗಳನ್ನು ಕಳಿಸಲು ಆರ್ಡರ್ ಮಾಡುವೆ"ನೆಂದು ಅವರು ಹೇಳಿದಾಗ ಚಳುವಳಿಗಾರರು ಒಪ್ಪದೆ, "ಈಗಲೇ ಕರೆಸಿ. ಅವರು ಬಂದ ಮೇಲೆಯೇ ನೀವು ವಾಪಸು ಹೋಗುವುದು" ಎಂದು ಪಟ್ಟು ಹಿಡಿದು, ಸುಮಾರು 3 ಗಂಟೆ ಕಾಲ ಅವರನ್ನು ತಡೆ ಹಿಡಿದರು.

ರಾವ್ ತಪ್ಪಿಸಿಕೊಂಡು ಹೋಗಲು ಯತ್ನಿಸಿದಾಗ ಗೊಂದಲವುಂಟಾಗಿ ಘರ್ಷಣೆಯ ಪರಿಸ್ಥಿತಿ ಉದ್ಭವಿಸಿದಾಗ ಪೋಲೀಸರು ಮಧ್ಯೆ ಪ್ರವೇಶಿಸಿ ಸುಮಾರು ಒಂದು ನೂರಕ್ಕೂ ಹೆಚ್ಚು ಚಳುವಳಿಕಾರರನ್ನು ಬಂಧಿಸಿ ಅಧಿಕಾರಿಯನ್ನು ಹೋಗಗೊಟ್ಟರು.

ಅಂದು ಸಂಜೆಯೇ ಬಂದ ಆಡಿಟರ್‌ಗಳು ಮರು ದಿನವೇ ಲೆಕ್ಕ ಪತ್ರ ತನಿಖೆ ಆರಂಭಿಸುವ ಮಾತು ಕೊಟ್ಟು, ಅದರಂತೆ ಕೆಲಸ ಆರಂಭಿಸಿದ್ದಾರೆ.

### ಗ್ರಾಮದ ರೈತರ ಮತ್ತು ಪ್ರಧಾನ-ಉಪ ಪ್ರಧಾನರ ಬೆಂಬಲ

ದಲಿತರ ಈ ಚಳುವಳಿಗೆ ನೆಮ್ಮಾರು ಮಂಡಲದ ಹಲವಾರು ಜನ ರೈತರು ಸಕ್ರಿಯ ಬೆಂಬಲ ಕೊಟ್ಟರು. ಚಳುವಳಿಕಾರರು ಪ್ರತಿದಿನ ಬೆಳಗ್ಗೆ ಧರಣಿಗೆ ಮುಂಚೆ ಬಸ್ ಸ್ಟ್ಯಾಂಡಿನಿಂದ ಬಿಡಿಒ ಕಚೇರಿಗೆ ಮತ್ತು ಸಂಜೆ ಧರಣಿಯ ನಂತರ ಪೇಟೆಯ ಮೂಲಕ ಪ್ರತಿಭಟನಾ ಮೆರವಣಿಗೆ ನಡೆಸುತ್ತಿದ್ದರು. ಈ ಎಲ್ಲ ಕಾರ್ಯಕ್ರಮದಲ್ಲಿ ಭಾಗವಹಿಸಿದ ರೈತರು ಸೆ. 17ರಂದು ಮಂಡಲ ಪ್ರಧಾನರ ನೇತೃತ್ವದಲ್ಲಿ ಘೇರಾವ್‌ನಲ್ಲಿ ಕೂಡ ಪಾಲ್ಗೊಂಡು ಬಂಧನಕ್ಕೂ ಒಳಗಾಗಿದ್ದರು. ಮಂಡಲದ ಉಪ ಪ್ರಧಾನ ಟಿ. ಕಾಳಯ್ಯ ದ.ಸಂ.ಸ. ಕಾರ್ಯಕರ್ತರೂ ಆಗಿದ್ದು, ಆರಂಭದಿಂದಲೂ ಈ ಹೋರಾಟಗಳ ಸರಣಿಯ ಮುಂಚೂಣಿಯಲ್ಲಿದ್ದಾರೆ.

ಸೆ. 25ರ ಜಿಲ್ಲಾ ಪರಿಷತ್ ಚರ್ಚೆಯ ಫಲಿತಾಂಶ ತೃಪ್ತಿಕರವಾಗಿಲ್ಲದಿದ್ದರೆ ಅನಂತರ ಚಳುವಳಿಯನ್ನು ಉಗ್ರಗೊಳಿಸುವುದಾಗಿ ದ.ಸಂ.ಸ. ತಿಳಿಸಿದೆ.

## ನ.ರಾ. ಪುರ: ಕಳವಿನ ಆರೋಪಿಗೆ ಸಜೆ

ನ.ರಾ. ಪುರ: ಕಾನೂರು ವಾಸಿ ರವಿಯಾನೆ ಬಾಬುಶೆಟ್ಟಿ ಎಂಬ ಆರೋಪಿಗೆ ಇಲ್ಲಿನ ನೂತನ ನ್ಯಾಯಾಧೀಶರಾದ ಬಿ. ಎಂ. ಮಲ್ಲಿಕಾರ್ಜುನಯ್ಯನವರು ಎರಡು ಕಳವಿನ ಆರೋಪಗಳ ಬಗ್ಗೆ 7 ತಿಂಗಳ ಸಾದಾ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದಾರೆ.

ಕಳೆದ ವರ್ಷ ಈತ ಸಂಜೆಯ ಕಾನೂರು ಸೊಸೈಟಿಯಲ್ಲಿ ಸುಮಾರು 450 ರೂ. ಬೆಲೆಯ ವಸ್ತುಗಳನ್ನೂ ಗಡಿಗೇಶ್ವರದ ಶಿವಶಂಕರ್ ಎಂಬವರ ಅಂಗಡಿಯಲ್ಲಿ 1600 ರೂ. ಬೆಲೆಯ ವಸ್ತುಗಳನ್ನೂ ಕದ್ದಿದ್ದನೆಂದು ನ. ರಾ. ಪುರ ಪೋಲೀಸರು ಹೂಡಿದ್ದ ಎರಡು ಮೊಕದ್ದಮೆಗಳ ಮೇಲೆ ಈ ತೀರ್ಪು ನೀಡಲಾಗಿದೆ.

## ನ. ರಾ. ಪುರ ತಾ|| ಬರಪೀಡಿತವೆಂದು ಸಾರಲು ಕಿಸಾನ್ ಸಭಾ ಆಗ್ರಹ

ನ. ರಾ. ಪುರ: ಈ ತಾಲ್ಲೂಕಿನಲ್ಲಿ ಈ ವರ್ಷ ಮಳೆಯಾಗದೆ ರೈತರು ತೀವ್ರವಾದ ಸಂಕಷ್ಟಕ್ಕೆ ಸಿಕ್ಕಿರುವುದರಿಂದ ಈ ತಾಲ್ಲೂಕನ್ನು ಬರಪೀಡಿತವೆಂದು ಘೋಷಿಸಿ ಬರ ಪರಿಹಾರ ಕಾಮಗಾರಿಗಳನ್ನು ಪ್ರಾರಂಭಿಸಬೇಕೆಂದು ಭಾರತ ಕಮ್ಯುನಿಸ್ಟ್ ಪಕ್ಷದ ನೇತೃತ್ವದ ಅಖಿಲ ಭಾರತ ಕಿಸಾನ್ ಸಭಾದ ತಾ|| ಘಟಕ ಸರ್ಕಾರವನ್ನು ಒತ್ತಾಯಿಸಿದೆ.

## ಜಯಪುರ ಪ್ರೌಢಶಾಲಾ ಸಮಿತಿ ಪದಾಧಿಕಾರಿಗಳು

ಜಯಪುರ: ಇಲ್ಲಿನ ಪ್ರೌಢಶಾಲಾ ಸ್ಥಾಯಿ ಸಮಿತಿ ಸಭೆ ಈಚೆಗೆ ನಡೆದು, 1987-88ನೇ ಸಾಲಿಗೆ ಈ ಕೆಳಕಂಡ ಪದಾಧಿಕಾರಿಗಳನ್ನು ಆರಿಸಲಾಯಿತು:

ಕೆ. ಎಸ್. ಶ್ರೀನಿವಾಸ್ (ಅಧ್ಯಕ್ಷ), ಎಂ.ಎಸ್. ವೆಂಕಟರಮಣ ಶೆಟ್ಟಿ (ಉಪಾಧ್ಯಕ್ಷ), ಎನ್. ವಿ. ಆನಂದರಾಮ ಭಟ್ (ಪ್ರಧಾನ ಕಾರ್ಯದರ್ಶಿ), ಎ.ಸಿ. ವಜ್ರಪ್ಪ (ಸಹ ಕಾರ್ಯದರ್ಶಿ) ಮತ್ತು ಕೆ. ಅಬ್ದುಲ್ಲಾ (ಖಜಾಂಚಿ), ಖಾಯಂ ಆಹ್ವಾನಿತರು: ಎಚ್. ಎ. ವಿಷ್ಣುಮೂರ್ತಿ, ಚಿದಂಬರ ಹೆಬ್ಬಾರ್, ಎಂ. ಚಂದ್ರಶೇಖರ್, ಮತ್ತು ಜಿ. ಸುಬ್ಬರಾವ್.

## ಮೇರುತಿಜೇಸೀಸ್ ವತಿಯಿಂದ ಶಿಕ್ಷಕರ ದಿನಾಚರಣೆ

ಜಯಪುರ: ಬಿಳಾಲ್‌ಕೊಪ್ಪ ಮೇರುತಿ ಜೇಸೀಸ್ ಆಶ್ರಯದಲ್ಲಿ ಸೆ 9ರಂದು ಇಲ್ಲಿ ಶಿಕ್ಷಕರ ದಿನ ಆಚರಿಸಲಾಯಿತು. ಬಿ. ರಮೇಶ್ ರಾವ್ ಅಧ್ಯಕ್ಷತೆ ವಹಿಸಿದ್ದು, ಎ. ಇ.ಓ. ಎಂ. ಚಂದ್ರಶೇಖರ್, ಎ. ಸಿ. ವಜ್ರಪ್ಪ, ಕೆ. ವೆಂಕಟೇಶ್ ಹೆಬ್ಬಾರ್ ಮುಖ್ಯ ಅತಿಥಿಯಾಗಿದ್ದರು. ಅಧ್ಯಾಪಕರಿಗೆ ಪ್ರತಿಭಾ ಸ್ಪರ್ಧೆ ಏರ್ಪಡಿಸಲಾಗಿತ್ತು. ಜಯಪುರ ಮಾಧ್ಯಮಿಕ ಶಾಲಾ ಮಕ್ಕಳಿಂದ ಮನರಂಜನೆ ಕಾರ್ಯಕ್ರಮ ನಡೆಯಿತು

## ಬೈಕಲ್ಲಿ ಬಂದರು, ಕಡಿದು ಪರಾರಿಯಾದರು...

(1ನೇ ಪುಟದಿಂದ)

ಕೆ.ಎಸ್. ರವೀಂದ್ರ(ಕುಕ್ಕುಡಿಗೆ ರವಿ) ಅವರಿಗೂ ನಡುವಿನ ರಾಜಕೀಯ ಪೈಪೋಟಿ ಮತ್ತು ಜಿದ್ದಿನ ಮುಂದುವರಿದ ರೂಪವೇ ಈ ಪ್ರಕರಣ ಎಂದು ಹಿನ್ನೆಲೆಯಲ್ಲಿ ಜನ ಹೇಳುತ್ತಿದ್ದಾರೆ. ಈ ಹಲ್ಲೆ ನಡೆಸಿದವರು ರವಿಯ ಕಡೆಯವರೆಂದೂ, ಉಮೇಶ ಚಂದ್ರಯ್ಯ ಹೆಗ್ಡೆಯವರ ಬೆಂಬಲಿಗನೆಂದೂ ಹೇಳಲಾಗುತ್ತಿದೆ.

ತಾನು ನಾಗಪ್ಪ ಎಂಬ ವ್ಯಕ್ತಿಗೆ ಗೊಬ್ಬರ ಕೊಟ್ಟಿದ್ದು, ಆತ ಈಗ ಆರೋಪಿಗಳ ಪರ ಇರುವುದರಿಂದ ಆತನಿಂದ ತಾನು ದುಡ್ಡು ವಾಪಸು ಕೇಳಿದ್ದಕ್ಕೆ ಪ್ರತೀಕಾರ ಈ ಹಲ್ಲೆ ಎಂದು ಉಮೇಶ ಪೋಲೀಸರಿಗೆ ತಿಳಿಸಿದ್ದಾನೆ.

### ವಿದ್ಯಾರ್ಥಿಗಳ 'ಪ್ರತಿಭಟನೆ'

ಸತೀಶ್ ಎಂಬ ಕಾಲೇಜು ವಿದ್ಯಾರ್ಥಿಯನ್ನು ಈ ಸಂಬಂಧದಲ್ಲಿ ವಿನಾ ಕಾರಣ ಪೋಲೀಸರು ಬಂಧಿಸಿದ್ದಾರೆಂದು 'ಪ್ರತಿಭಟಿಸಿ' ಇಲ್ಲಿನ ಪ್ರ. ದ. ಕಾಲೇಜು ವಿದ್ಯಾರ್ಥಿಗಳು ಸೆ. 19ರಂದು ಊರಿನಲ್ಲಿ ಮೆರವಣಿಗೆ ನಡೆಸಿ, ಪೋಲೀಸರ ವಿರುದ್ಧ ಘೋಷಣೆ ಕೂಗಿದರು.

ಉಮೇಶ ತನ್ನ ದೂರಿನಲ್ಲಿ ಹೆಸರಿಸಿರುವ 'ನಿಲುವಾಗಿಲು ಕಡೆಯ ಸತೀಶ' ಯಾರೆಂದು ತಿಳಿಯಲು ಈ ಸತೀಶನನ್ನು ಸಬ್ ಇನ್ಸ್‌ಪೆಕ್ಟರ್ ತನಿಖೆಗಾಗಿ ಕರೆಸಿದ್ದು, ಅನಂತರ ದೂರಿನಲ್ಲಿ ತಿಳಿಸಿರುವ ಸತೀಶ ಬೇರೆಯವನೆಂದು ಆತ ನೀಡಿದ ಸಮಜಾಯಿಷಿಗನುಗುಣವಾಗಿ ಆತನನ್ನು ವಾಪಸು ಕಳಿಸಿದ್ದರೆಂದೂ, ಆದರೆ ಅಷ್ಟಕ್ಕೇ ಆತ ಕಾಲೇಜಿನಲ್ಲಿ ವಿದ್ಯಾರ್ಥಿಗಳನ್ನು ಚಿತಾವಣೆ ಮಾಡಿ ಈ ರೀತಿ ಮೆರವಣಿಗೆ ಮಾಡಿಸಿದನೆಂದೂ ಪೋಲೀಸ್ ಮೂಲಗಳು ತಿಳಿಸಿವೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ಪೀಠಿಕೆ ಅಚ್ಚುಕೂಟ, ಕೊಪ್ಪ